**Sri Mahaganapathe - Itara Varnagalu :** *A collection of Varnas by Dr. T. N. Padma, Professor & Head (Rtd.) Department of Vocal Music, University College of Fine Arts, Manasagangotri, University of Mysore, Mysore. First Edition 2008. Published by D. V. K. Murthy, Krishnamurthipuram, Mysore-570 004, ☎2331484.*

ಪ್ರಥಮ ಮುದ್ರಣ ೨೦೦೮



ರೂ.

**ಡಿ.ಟಿ.ಪಿ ಸಂಯೋಜನೆ :** ಸಾಫ್ಟ್ ಟಚ್, 17ನೇ ಮುಖ್ಯರಸ್ತೆ, ಸರಸ್ವತಿಪುರಂ, ಕುವೆಂಪುನಗರ ಜೋಡಿ ರಸ್ತೆ, ಮೈಸೂರು.
**ಮುದ್ರಣ :** ವಾಣೀ ಪ್ರೆಸ್, ಚಾಮರಾಜಪುರಂ, ಮೈಸೂರು, 570 005. ☎2330295

ಪೂಜ್ಯರಾದ ನನ್ನ ಮಾತಾಪಿತೃಗಳು

**ಕೀರ್ತಿಶೇಷ ಶ್ರೀಮತಿ ಟಿ. ಎನ್. ಸುಬ್ಬಲಕ್ಷಮ್ಮ**

**ಕೀರ್ತಿಶೇಷ ಶ್ರೀ ಟಿ. ನರಸಿಂಹಶಾಸ್ತ್ರಿ**

ಹಾಗೂ

ನನ್ನ ಅತ್ತೆ ಮಾವಂದಿರು

**ಶ್ರೀಮತಿ ಲಕ್ಷ್ಮೀದೇವಮ್ಮ**

**ಕೀರ್ತಿಶೇಷ ಶ್ರೀ ಎಂ. ವಿ. ಶ್ರೀಕಂಠಶಾಸ್ತ್ರಿ**

ಇವರ ದಿವ್ಯಪಾದಾರವಿಂದಗಳಿಗೆ ಸಮರ್ಪಿತ

# ನಿವೇದನ

ಕರ್ನಾಟಕ ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲಿ 'ಮನೋಧರ್ಮಸಂಗೀತ' ಪ್ರಧಾನವಾದ ಒಂದು ಭಾಗವಾದರೆ 'ವಾಗ್ಗೇಯರಚನೆಗಳದು' ಇನ್ನೊಂದು ಭಾಗ. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳೆಂದೇ ಭಾವನೆ. ಇಂತಹ ವಾಗ್ಗೇಯ ರಚನೆಗಳನ್ನು ರಾಗದೇಗುಲಗಳ ಪರಿಧಿಯಲ್ಲಿ, ಸೂತ್ರರೂಪದಲ್ಲಿ ಸೃಷ್ಟಿಸಿ, ಸಂಗೀತಕ್ಷೇತ್ರಕ್ಕೆ ಕೊಡುಗೆಯಾಗಿ ನೀಡಿರುವ ನಮ್ಮ ಧೀಮಂತ ವಾಗ್ಗೇಯಕಾರರೆಲ್ಲ ನಮ್ಮ ಸಂಸ್ಕೃತಿಯಲ್ಲಿ ಬೆರೆತುಹೋಗಿದ್ದಾರೆ. ವಾಸ್ತವವಾಗಿ ಅವರ ಕೊಡುಗೆ ಅನನ್ಯ ಹಾಗೂ ಅಸದೃಶ. ಅಂತಹ ಅತ್ಯಮೂಲ್ಯರತ್ನಗಳಲ್ಲಿ ಕೆಲವು ವರ್ಣಗಳನ್ನು ಪ್ರಾತಿನಿಧಿಕವಾಗಿ ಸಂಗ್ರಹಿಸುವ ಯತ್ನ ಇಲ್ಲಿದೆ.

ಹಲವು ವಿಧದ ರಚನಾ ಪ್ರಕಾರಗಳನ್ನು ಹೊಂದಿರುವ ಕರ್ನಾಟಕ ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲಿ ಹಲವು ದೃಷ್ಟಿಕೋನಗಳಿಂದ ವರ್ಣಗಳದು ಅತಿ ವಿಶಿಷ್ಟ ಸ್ಥಾನ ಎಂಬುದು ಸರ್ವವೇದ್ಯ. ಇದು ಅಭ್ಯಾಸಗಾನ-ಸಭಾಗಾನಗಳೆರಡೂ ವಿಭಾಗದಲ್ಲಿ ಪ್ರಯೋಜನವಾಗಿ ಮನೋಧರ್ಮ ಸಂಗೀತದ ರಾಗಾಲಾಪನೆ, ತಾನ, ಸ್ವರಕಲ್ಪನೆಗಳಿಗೆ ಬುನಾದಿ ಹಾಕುತ್ತದೆ. ರಾಗದ ಸ್ವರೂಪವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ. ತಾಳದ ಭದ್ರತೆಗೆ ಸಹಾಯವಾಗುತ್ತದೆ. ಹೀಗಾಗಿ ಇಷ್ಟೆಲ್ಲ ಉಪಯೋಗಗಳುಳ್ಳ ವರ್ಣಗಳು ಸಂಗೀತ ಕ್ಷೇತ್ರದಲ್ಲಿ ಸಹಜವಾಗಿಯೇ ಅತ್ಯಂತ ಮಹತ್ವದ ರಚನೆಗಳೆನಿಸಿವೆ.

ಕರ್ನಾಟಕ ಸಂಗೀತ ರಚನೆಗಳನ್ನೊಳಗೊಂಡಂತೆ, ಅದರಲ್ಲೂ ಕರ್ನಾಟಕ ಸಂಗೀತದ ಜೀವಬಿಂದುವೇ ಆಗಿರುವ ವರ್ಣಗಳನ್ನೇ ಪ್ರತ್ಯೇಕವಾಗಿ ಹೊಂದಿರುವ ಕನ್ನಡಲಿಪಿಯ ಹಲವು ಪುಸ್ತಕಗಳು ಈಗಾಗಲೇ ಹೊರಬಂದಿವೆ. ಇದೀಗ ಅದೇ ಸಾಲಿಗೆ ಸೇರಿಸುವ ಆಶಯದಿಂದ 65 ವರ್ಣಗಳನ್ನು ಒಳಗೊಂಡಂತೆ **ವರ್ಣಗಳು - ಸಂಪುಟ ಎರಡು** ಪ್ರಕಟಿಸಲಾಗಿದೆ. ವರ್ಣಗಳ ಪ್ರಸ್ತುತ ಸಂಕಲನದಲ್ಲಿ ಶ್ಯಾಮಶಾಸ್ತ್ರಿ, ಸ್ವಾತಿ ತಿರುನಾಳರು, ವಾಲಾಜಪೇಟೆ ವೆಂಕಟರಮಣ ಭಾಗವತರು, ಗೋವಿಂದಸ್ವಾಮಯ್ಯ, ರಾಮಸ್ವಾಮಿ ದೀಕ್ಷಿತರು, ತಂಜಾವೂರು ಪೊನ್ನಯ್ಯ, ಮುತ್ತಯ್ಯ ಭಾಗವತರು, ಘನಂಕೃಷ್ಣಯ್ಯರ್, ತಿರುವೊಟ್ರಿಯೂರ್‌ತ್ಯಾಗಯ್ಯರ್, ವೀಣಾ ಕುಪ್ಪಯ್ಯರ್, ಪಟ್ನಂ ಸುಬ್ರಹ್ಮಣ್ಯ ಅಯ್ಯರ್, ವೀಣಾ ಶೇಷಣ್ಣ, ಮೈಸೂರು ಸದಾಶಿವರಾಯರು, ರಾಮ್ನಾಡು ಶ್ರೀನಿವಾಸ ಅಯ್ಯಂಗಾರ್, ಕೆ.ವಿ. ಶ್ರೀನಿವಾಸ ಅಯ್ಯಂಗಾರ್, ವೈಣಿಕ ಕಾಳಹಸ್ತಿ ವೆಂಕಟಸಾಮಿರಾಜು, ಬಿ.ಕೆ. ಪದ್ಮನಾಭರಾಯರಂಥ ಘನ ಸಂಗೀತಜ್ಞರ ರಚನೆಗಳನ್ನು ಕಾಣಬಹುದಾಗಿದೆ. ಇಲ್ಲಿರುವ ವರ್ಣಗಳ ಸಂಗ್ರಹ ಮತ್ತು ವಿಷಯ ಮಾಹಿತಿಗಾಗಿ ವಾಲಾಜಪೇಟೆ ವೆಂಕಟರಮಣ ಭಾಗವತರ ರಚನೆಗಳು (ತಮಿಳು) ಸಂಗೀತ ಸಂಪ್ರದಾಯ ಪ್ರದರ್ಶಿನಿ, ಸಂಕೀರ್ತನ ರತ್ನಾವಳಿ, ಪಟ್ನಂ ಸುಬ್ರಹ್ಮಣ್ಯಯ್ಯಗಾರಿ ರಚನಲು, ಸಂಗೀತ ಸುಧಾಂಬುಧಿ, ಸಂಗೀತ ಚೂಡಾಮಣಿ, ಮುತ್ತಯ್ಯ ಭಾಗವತರ ರಚನೆಗಳು, ಗಾಂಧರ್ವ ಕಲ್ಪವಲ್ಲಿ, ಸಂಗೀತವಾಹಿನಿ ಮೊದಲಾದ ಹೊತ್ತಿಗೆಗಳಿಂದ ಸಹಾಯ ಪಡೆದಿದ್ದೇನೆ. ಇವೆಲ್ಲದರೊಂದಿಗೆ ಸ್ವಂತ ರಚನೆಯೊಂದನ್ನು ಅಳವಡಿಸಿದ್ದೇನೆ. ಉಳಿದ ಕೆಲವು ವರ್ಣಗಳು ನನಗೆ ಪಾಠವಾಗಿದ್ದವು. ವರ್ಣ ಸಂಗ್ರಹದ ಈ ಪುಸ್ತಕ ಸಂಗೀತಾಭಿಮಾನಿಗಳಿಗೆ ಉಪಯುಕ್ತವಾದರೆ ನನ್ನ ಸುದೈವ ಎಂದು ಭಾವಿಸುತ್ತೇನೆ. ಈ ಮೊದಲೇ 54 ವರ್ಣಗಳನ್ನೊಳಗೊಂಡಂತೆ **ವರ್ಣಗಳು - ಸಂಪುಟ ಒಂದು** ಪ್ರಕಟವಾಗಿದ್ದು, ನನ್ನ ಆ ಪುಸ್ತಕಕ್ಕೆ ಸಂಗೀತಾಭಿಮಾನಿಗಳಿಂದ ಒಳ್ಳೆಯ ಪ್ರತಿಕ್ರಿಯೆ ಲಭ್ಯವಾಗಿದೆ. ಇದೀಗ ಆ ಹೊತ್ತಿಗೆಯ ಎರಡನೇ ಆವೃತ್ತಿಯೂ

ಪ್ರಕಟವಾಗಿದೆ. ಈ ನಿಟ್ಟಿನಲ್ಲಿ ಕಲಾವಿದರು, ಕಲಾಭಿಮಾನಿಗಳು, ರಸಿಕ ಜನರು ವ್ಯಕ್ತಪಡಿಸಿದ ಸದಭಿಪ್ರಾಯಗಳಿಂದ ಸ್ಫೂರ್ತಿಗೊಂಡು **ವರ್ಣಗಳು - ಸಂಪುಟ ಎರಡು** ಪುಸ್ತಕ ಸಿದ್ಧಪಡಿಸಲು ಸಾಧ್ಯವಾಯಿತು. ಈ ನಿಟ್ಟಿನಲ್ಲಿ ಪ್ರೋತ್ಸಾಹಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

ವರ್ಣಸಂಗ್ರಹದ ಈ ಎರಡನೆಯ ಸಂಪುಟವನ್ನೂ ಪ್ರಕಟಿಸುತ್ತಿರುವ ಮಾನ್ಯ ಪ್ರಕಾಶಕರಾದ ಶ್ರೀಮಾನ್ ಡಿ.ವಿ.ಕೆ. ಮೂರ್ತಿಯವರಿಗೆ ಅನಂತ ನಮಸ್ಕಾರಗಳು.

ಶಾಸ್ತ್ರೀಯ ಸಂಗೀತ ರಚನೆಗಳಿಗೆ ಡಿ.ಟಿ.ಪಿ ಸಂಯೋಜಿಸುವುದಾಗಲೀ, ಮುದ್ರಿಸುವುದಾಗಲೀ ಕಷ್ಟದ ಕೆಲಸವೇ. ಆದರೂ ಅದನ್ನು ಬಹಳ ಮುತುವರ್ಜಿಯಿಂದ ಸಿದ್ಧಪಡಿಸಿರುವ ಸಾಫ್ಟ್ ಟಚ್‌ನ ಶ್ರೀ ಪ್ರವೀಣ್ ಕುಮಾರ್‌ರವರಿಗೂ ಮುಖ್ಯವಾಗಿ ಶ್ರೀಮತಿ ಸುಪ್ರಿಯ ಅವರಿಗೂ, ಪುಸ್ತಕವನ್ನು ಮುದ್ರಿಸಿರುವ ವಾಣೀ ಪ್ರೆಸ್‌ನವರಿಗೂ ನಾನು ಆಭಾರಿಯಾಗಿದ್ದೇನೆ.

**ಟಿ.ಎನ್. ಪದ್ಮ**

# ಪೀಠಿಕೆ

'ವರ್ಣ' ಎಂಬ ಪದವು ಸಾಮಾನ್ಯಾರ್ಥದಲ್ಲಿ ಬಣ್ಣ, ಅಕ್ಷರ ಅಥವಾ ಒಂದು ಬುಡಕಟ್ಟಿನ ಜನಾಂಗ ಎಂಬ ಬೇರೆ ಬೇರೆ ಅರ್ಥಗಳನ್ನು ನೀಡುತ್ತದೆ. ಆದಿಲಾಕ್ಷಣಿಕನಾದ ಭರತ ತನ್ನ ನಾಟ್ಯಶಾಸ್ತ್ರದಲ್ಲಿ 'ಗಾನಕ್ರಿಯಾ ಉಚ್ಯೈತೇ ವರ್ಣ:' ಎನ್ನುತ್ತಾ ವರ್ಣ ಎಂಬುದು ಗಾನಕಲೆಯ ಒಂದು ಪ್ರಕ್ರಿಯೆ ಎನ್ನುತ್ತಾನೆ. ಇದರಲ್ಲಿ ವರ್ಣ ಎಂದರೆ ಸ್ವರಗಳು. ಅವು ಸಂಗೀತವಾಚಕವಾದಂತೆ ಸರಿಗಮಪದನಿ ಎಂಬ ಸಪ್ತಸ್ವರಗಳಾಗಿ ಉಗಮಿಸುತ್ತವೆ. ಅವು ಆರೋಹಿ, ಅವರೋಹಿ, ಸಂಚಾರಿ, ಸ್ಥಾಯಿಗಳೆಂಬ ನಾಲ್ಕು ವಿಧದಲ್ಲಿದ್ದು ಅವುಗಳ ಸಮ್ಮಿಶ್ರರೂಪದಲ್ಲಿ ಪ್ರಾಯೋಗಿಕವಾಗಿ ರೂಪುಗೊಂಡ ರಚನೆಯೇ ವರ್ಣ ಎನ್ನುವುದುಂಟು. ಇನ್ನೊಂದು ಹೇಳಿಕೆಯ ಪ್ರಕಾರ ಗಾನಕ್ರಿಯೆಯೇ ವರ್ಣ. ಇದರಲ್ಲಿ ಕಂಡುಬರುವ ವರ್ಣಗಳ ಲಕ್ಷಣವನ್ನು ಮತಂಗ ತಿಳಿಸುತ್ತಾನೆ. ಗುಂಪುಗುಂಪಾಗಿ ತಾನರೂಪದಲ್ಲಿ ಸಂಚರಿಸುವ ಒಂದು ಅಥವಾ ಹೆಚ್ಚು ಸ್ವರಗಳ ಪ್ರಯೋಗವನ್ನು ಸಂಚಾರಿ ವರ್ಣ ಎನ್ನಲಾಗಿದೆ. ಮತ್ತೊಂದು ಹೇಳಿಕೆಯಂತೆ ಪ್ರಾಚೀನಗೇಯರೂಪವಾಗಿದ್ದ ವರ್ಣವನ್ನು ಪರಿಶೀಲಿಸಿದಾಗ, ವರ್ಣಸ್ವರಗಳಿಗೂ ಇಂದು ರೂಢಿಯಲ್ಲಿರುವ ವರ್ಣ ಎಂಬ ರಚನಾಪ್ರಕಾರಕ್ಕೂ ಯಾವ ಸಂಬಂಧವೂ ಇರುವುದಿಲ್ಲ ಎಂಬಂಶ ಬೋಧೆಯಾಗುತ್ತದೆ. ಇದು ಕೃತಿ ಎಂಬ ರಚನೆ ರೂಪುಪಡೆದ ನಂತರವಷ್ಟೆ ಸೃಷ್ಟಿಯಾಗಿರುವ ವಿಶಿಷ್ಟ ರಚಾನಾಪ್ರಕಾರವಾಗಿದೆ.

ಇದೇನೇ ಇದ್ದರೂ ಕರ್ನಾಟಕ ಸಂಗೀತೇತಿಹಾಸದ ಪರ್ವಕಾಲಕ್ಕೂ ಮುನ್ನವೇ ಅಂದರೆ 17ನೇ ಶತಮಾನದ ಉತ್ತರಾರ್ಧ 18ನೇ ಶತಮಾನದ ಪೂರ್ವಾರ್ಧದಲ್ಲಿಯೇ, ಪ್ರಸ್ತುತ ರೂಢಿಯಲ್ಲಿರುವ ವರ್ಣ ಎಂಬ ಪ್ರಕಾರವು ವೀಣಾ ಪೆರುಮಾಳಯ್ಯ, ಪಚ್ಚಿಮಿರಿಯಂ ಆದಿಪ್ಪಯ್ಯ, ರಾಮಸ್ವಾಮಿ ದೀಕ್ಷಿತರು, ಕೂವನಸ್ವಾಮ್ಯಯ್ಯ, ಗೋವಿಂದಸ್ವಾಮಯ್ಯ, ಸೊಂಟಿ ವೆಂಕಟಸುಬ್ಬಯ್ಯ, ಸೊಂಟಿ ವೆಂಕಟರಮಣಯ್ಯ ಮೊದಲಾದವರಿಂದ ರಚಿತವಾಗಿದೆ. ಅನಂತರ ಶ್ಯಾಮಶಾಸ್ತ್ರಿಗಳು, ಮುತ್ತುಸ್ವಾಮಿ ದೀಕ್ಷಿತರು, ಸ್ವಾತಿ ತಿರುನಾಳರು, ಬಾಲುಸ್ವಾಮಿ ದೀಕ್ಷಿತರು, ಸುಬ್ಬರಾಮ ದೀಕ್ಷಿತರು, ವಾಲಾಜಪೇಟೆ ವೆಂಕಟರಮಣ ಭಾಗವತರು, ಪಲ್ಲವಿ ದೊರೆಸ್ವಾಮಯ್ಯ, ಪಲ್ಲವಿ ಗೋಪಾಲಯ್ಯ, ವೀಣಾ ಕುಪ್ಪಯ್ಯ, ತಿರುವೊಟ್ರಿಯೂರ್ ತ್ಯಾಗಯ್ಯರ್, ತಚ್ಚೂರು ಸಿಂಗ್ರಾಚಾರ್, ಪಿಟೀಲು ಪೊನ್ನುಸ್ವಾಮಿ, ಮಾನಂಬುಚಾವಡಿ ವೆಂಕಟಸುಬ್ಬಯ್ಯ, ತಂಜಾವೂರು ಸಹೋದರರು, ಪಟ್ನಂ ಸುಬ್ರಹ್ಮಣ್ಯ ಅಯ್ಯರ್, ರಾಂನಾಡ್ ಶ್ರೀನಿವಾಸ ಅಯ್ಯಂಗಾರ್, ಮುತ್ತಯ್ಯ ಭಾಗವತರು, ನಾದಮುನಿ ಪಂಡಿತರು, ಟೈಗರ್ ವರದಾಚಾರ್ ಮೊದಲಾದ ಹಲವು ಮಹೋದಯ ವಾಗ್ಗೇಯಕಾರರಿಂದ ವಿಪುಲವಾಗಿ ರಚಿತವಾಗಿವೆ. ಅಲ್ಲದೆ ಸಮಕಾಲೀನವಾಗಿಯೂ ಅನೇಕ ವಿದ್ವಾಂಸರು ನೂತನವಾಗಿ ವರ್ಣಗಳನ್ನು ಸಂಗೀತ ಕ್ಷೇತ್ರಕ್ಕೆ ಸೇರ್ಪಡೆ ಮಾಡುತ್ತಲೇ ಬಂದಿದ್ದಾರೆ.

ಪ್ರಸ್ತುತ ಸಂಗೀತ ಕ್ಷೇತ್ರದಲ್ಲಿ ವರ್ಣವು ನಿರ್ದಿಷ್ಟರೂಪವುಳ್ಳ, ಅತಿ ಮಹತ್ವದ ಜನಪ್ರಿಯ ರಚನಾಪ್ರಕಾರ. ಅಭ್ಯಾಸಗಾನ, ಸಭಾಗಾನಗಳೆರಡು ಕ್ಷೇತ್ರದಲ್ಲೂ ಪ್ರಧಾನಪಾತ್ರವಹಿಸುವ ವರ್ಣದಲ್ಲಿ ವೈವಿಧ್ಯ ಉಂಟು. 'ತಾನವರ್ಣ' ಎಂಬುದು ತಾನದ ಮಾದರಿಯಲ್ಲಿ ಧಾತು ಜೋಡಣೆ ಹೊಂದಿರುವುದು. 'ಪದವರ್ಣ'ವು ಚೌಕವರ್ಣವೆಂದೂ ಕರೆಯಲ್ಪಡುವ, ವಿಳಂಬಗತಿಯಲ್ಲಿ ಪ್ರಯೋಗವಾಗುವ, ಚಿಟ್ಟೆಸ್ವರ ಹಾಗೂ ಮುಕ್ತಾಯ ಸ್ವರಗಳಿಗೆಲ್ಲ ಸಾಹಿತ್ಯವನ್ನು ಹೊಂದಿರುವ ರಚನೆ. ಆದರೆ ಕೆಲವು ಪದವರ್ಣಗಳು ತಾನವರ್ಣಗಳಂತೆಯೇ

ಪ್ರಯೋಗವಾಗುವ ರೂಢಿಯೂ ಉಂಟು. ತಾನವರ್ಣಗಳಲ್ಲಿ ಒಂದೇ ರಾಗದ ಬಳಕೆ ಆದ್ಯಂತವಾಗಿರಬಹುದು ಇಲ್ಲವೇ ಹಲವು ರಾಗಗಳು ನಿಯಮಬದ್ಧವಾಗಿ ಬಳಕೆಯಾಗಿ ಅದು ರಾಗಮಾಲಿಕಾವರ್ಣವೂ ಆಗಿರಬಹುದು. ವರ್ಣಗಳ ಸ್ವರೂಪವನ್ನು ಆಧರಿಸಿ ಸ್ವರಸಾಹಿತ್ಯ ವರ್ಣ, ಗ್ರಹಭೇದ ವರ್ಣ, ನಕ್ಷತ್ರಮಾಲಿಕಾ ವರ್ಣ ಮುಂತಾದ ವಿಭೇದಗಳನ್ನೂ ಕಾಣುತ್ತೇವೆ.

ವರ್ಣಗಳು ಆದಿತಾಳದಲ್ಲಿ ಅಧಿಕವಾಗಿ ಲಭ್ಯವಿದ್ದರೂ ರೂಪಕ, ಛಾಪು, ಝಂಪೆ, ಖಂಡತ್ರಿಪುಟದಂತಹ ತಾಳಗಳಲ್ಲೂ ರಚಿತವಾಗಿವೆ. ವರ್ಣಗಳಲ್ಲಿ ಪೂರ್ವಾಂಗ, ಉತ್ತರಾಂಗಗಳೆಂದು ಎರಡು ಪ್ರಧಾನ ಭಾಗವಿರುತ್ತದೆ. ಪಲ್ಲವಿ, ಅನುಪಲ್ಲವಿ, ಚಿಟ್ಟೆಸ್ವರ ಸೇರಿದಂತೆ ಪೂರ್ವಾಂಗವಾದರೆ, ಚರಣ ಮತ್ತು ಎತ್ತುಗಡೆ ಸ್ವರಗಳು ಸೇರಿ ಉತ್ತರಾಂಗ ಎನಿಸುತ್ತದೆ. ವರ್ಣಗಳ ಪಲ್ಲವಿ, ಅನುಪಲ್ಲವಿ ಭಾಗಗಳಲ್ಲಿ ಸಾಹಿತ್ಯಾಕ್ಷರಗಳು ಕಡಿಮೆಯಿದ್ದು ಅಕಾರ, ಇಕಾರ, ಉಕಾರಗಳ ಅಳವಡಿಕೆ ವಿಫುಲವಾಗಿರುತ್ತದೆ. ಸಾಹಿತ್ಯದಲ್ಲಿ ಬಹುಮಟ್ಟಿಗೆ ಏಕರೀತಿಯ ಪದಪುಂಜವಿದ್ದು ಶೃಂಗಾರ (ವಿರಹ) ಭಾವ ವ್ಯಕ್ತವಾಗುತ್ತದೆ. ಕೆಲವೊಮ್ಮೆ ಇನ್ನಾವುದೇ ಭಾವವನ್ನು ಅಭಿವ್ಯಕ್ತಿಸುವ ಸಾಹಿತ್ಯವನ್ನೂ ಒಳಗೊಂಡಿರಬಹುದು (ಆಶ್ರಯದಾತನ ಸ್ತುತಿ ಮುಂತಾಗಿ). ಅಲಂಕಾರಿಕ ಅಂಶಗಳಾದ ಚಿಟ್ಟೆಸ್ವರ, ಸ್ವರಾಕ್ಷರ, ಯತಿಮಾದರಿಯ ಧಾತುಮಾತುಗಳ ಅಳವಡಿಕೆ, ವಾಗ್ಗೇಯಕಾರಮುದ್ರೆ, ಪೋಷಕರ ಮುದ್ರೆ ಇತ್ಯಾದಿಗಳೂ ವರ್ಣದಲ್ಲಿ ಕಾಣಬರುತ್ತವೆ. ಸಾಧಾರಣವಾಗಿ ಚರಣ ಭಾಗದ ಸಾಹಿತ್ಯ ಒಂದು ಆವರ್ತಕ್ಕಷ್ಟೆ ಇರುತ್ತದೆ. ಈ ಸಾಹಿತ್ಯ ಪೂರ್ಣ ಅರ್ಥ ನೀಡುವಂತಾದರೂ ಅಥವಾ ಅಪೂರ್ಣ ಅರ್ಥ ಹೊಂದಿಯೂ ಇರಬಹುದು. ಉದಾಹರಣೆಗೆ ಶಂಕರಾಭರಣ ವರ್ಣದಲ್ಲಿ 'ನೀರಜಾಕ್ಷಿ ನೀಪೈ'; ಬೇಗಡೆ ವರ್ಣದಲ್ಲಿ 'ಪಗವಾರಿ ಬೋಧನವಿನಿ'; ಆರಭಿವರ್ಣದಲ್ಲಿ 'ನಳಿನಾಕ್ಷಿ ನೇನೆಂತೋ' ಮುಂತಾಗಿ. ಆದರೆ ದೇವದೇವಿಯರ ವಿಶೇಷಣಗಳೇ ಸಾಹಿತ್ಯವಾಗಿದ್ದಲ್ಲಿ ಅವು ಪೂರ್ಣವಾಗಿರುತ್ತವೆ. ಉದಾಹರಣೆಗೆ ಬೇಗಡೆ ವರ್ಣದಲ್ಲಿ 'ಪಮರಪಾವನಿ ಭವಾನಿ'; ಕೆಲವೊಮ್ಮೆ ವಿಶೇಷಣಗಳಿಲ್ಲದಿದ್ದರೂ ಪೂಣಾರ್ಥ ನೀಡುವಂತಿರಬಹುದು. ಉದಾಹರಣೆಗೆ: ಜನರಂಜನಿ ವರ್ಣದಲ್ಲಿ 'ಮನವ್ಯಾಲಗಿಂಪವೇಮಯ್ಯ'.

ಶ್ಯಾಮಾಶಾಸ್ತ್ರಿಗಳ ಕೆಲವು ವರ್ಣಗಳಲ್ಲಿ ಚರಣದ ಸಾಹಿತ್ಯ 2-3 ರೀತಿಯಲ್ಲಿರುವುದು ಗಮನಾರ್ಹ. ಉದಾಹರಣೆಗೆ ಕಲ್ಯಾಣಿ ರಾಗದ 'ನೀವೇ ಗತಿಯನಿ' ವರ್ಣದಲ್ಲಿ ಚರಣ ೧- ಕಾಮಕೋಟಿ ಪೀಠ ನಿವಾಸಿನಿ ಕಲ್ಯಾಣಿ. ಚರಣ ೨ ಕಾಮಕೋಟಿ ಪೀಠನಿವಾಸಿನಿ ಕಲ್ಯಾಣಿ ಶ್ಯಾಮಕೃಷ್ಣಸೋದರಿ ದೇವಿ. ನೀದು ಚರಿತಮು ವಿನಿವಿನಿ ಪಾದಕಮಲಮು ಕೋರಿತಿನಿ, ಸದಾಗತಿಯನಿ ಪೊಗಡಿ ಪೊಗಡಿ ಚರಣಮು ಗೊಲಿಚೇನಮ್ಮ, ಬಂಗಾರು ಕಾಮಾಕ್ಷಿ| ಇದು ನಾಲ್ಕು ಆವರ್ತಗಳಿಗಿದ್ದು, ಎತ್ತುಗಡೆ ಸ್ವರಗಳನ್ನು ಹಾಡುವಾಗ ಮೊದಲ ಆವರ್ತದಲ್ಲಿರುವಷ್ಟು ಸಾಹಿತ್ಯವನ್ನು ಮಾತ್ರ ಪುನರಾವರ್ತಿಸುವುದುಂಟು. ಮತ್ತೆ ಕೆಲವು ವರ್ಣಗಳಲ್ಲಿ ಮಾಮೂಲಿನಂತೆ ಪಲ್ಲವಿ ಅನುಪಲ್ಲವಿ ಚರಣಾರಂಭದೊಂದಿಗೆ ಚಿಟ್ಟೆ ಸ್ವರಕ್ಕೂ ಸಾಹಿತ್ಯ ಅಳವಟ್ಟಿರುವುದುಂಟು. ಆದರಿವು ಪದವರ್ಣಗಳಲ್ಲ.

ಅಪರೂಪವಾಗಿ ಕೆಲವು ವರ್ಣಗಳಲ್ಲಿ 'ಅನುಬಂಧ' ಎಂಬ ವಿಶೇಷ ಭಾಗವೊಂದಿರುತ್ತದೆ. ಸಾಹಿತ್ಯಾರ್ಥವು ಪೂರ್ಣಗೊಳ್ಳುವಂತೆ ಮಾಡುವುದು ಇದರ ಉದ್ದೇಶ. ಉದಾಹರಣೆಗೆ ಭೈರವಿ ರಾಗದ ಆದಿಪ್ಪಯ್ಯನವರ ವರ್ಣ. ಇದರ ಚರಣಭಾಗದಲ್ಲಿ 'ಚಿರುನೌಮೋಮುನ' ಎಂಬ ಭಾಗವನ್ನಷ್ಟೆ ಹಾಡುವುದು ರೂಢಿಯಿದ್ದರೂ 'ಚಿರುಚಮಟಲು ರಾಕ ಆಗರಿಮಮರಕ ತೇಜಿನೆಕ್ಕಿ ಗಮಕಿಂಪುಚುರಾಕ ಆ ನೆರವೈಖರಿನಿ ಮೀರಿ ನೆಲತ ನನ್ನೆಂತೋ ವೇಡೆನುರ ಮರುಕೇಳಿ ದಾನಿನೇಲುಕೋ' ಎಂಬ ಸಾಹಿತ್ಯ ಮುಂದೆ ಸಾಗಿ ಪೂಣಾರ್ಥ ನೀಡುತ್ತದೆ. ಈ ಕಾರಣಗಳಿಂದ ವರ್ಣರಚನಕಾರಿನಿಗೆ ಸರಿಯಾದ ಸಾಹಿತ್ಯ ಜ್ಞಾನ, ರಾಗವಿಸ್ತರಣೆಯ ತಿಳಿವು, ಲಯಜ್ಞಾನ ಎಲ್ಲವೂ ತಿಳಿದಿರಬೇಕಾಗುತ್ತದೆ.

ವರ್ಣಗಳ ಭಾಷೆ ಬಹುಮಟ್ಟಿಗೆ ತೆಲುಗು. ಆದರೆ ತಮಿಳು, ಕನ್ನಡ ಮೊದಲಾದ ಭಾಷೆಗಳಲ್ಲೂ ವರ್ಣಗಳು ಕಾಣಸಿಗುವುದುಂಟು. ತಮ್ಮೆಲ್ಲ ರಚನೆಗಳಿಗೂ ಸಂಸ್ಕೃತ ಭಾಷೆಯನ್ನೇ ಬಳಸಿರುವ (ಮಣಿಪ್ರವಾಳ ರಚನೆಗಳನ್ನುಳಿದು) ಮುತ್ತುಸ್ವಾಮಿ ದೀಕ್ಷಿತರು ಕೂಡ ತಮ್ಮ ವರ್ಣಗಳಲ್ಲಿ ತೆಲುಗು ಭಾಷೆಯನ್ನೇ ಬಳಸಿರುವುದು ಗಮನಾರ್ಹ.

**ವರ್ಣಗಳ ಕರ್ತೃತ್ವದ ಬಗೆಗೆ :** ವರ್ಣ ರಚನಕಾರರಲ್ಲಿ ಪ್ರತಿಯೊಬ್ಬರೂ ತಮ್ಮ ವರ್ಣಗಳೆಲ್ಲಕ್ಕೂ ನಿಖರವಾದ ಒಂದೇ ಮುದ್ರೆಯನ್ನು ಬಳಸಿಲ್ಲ ಎಂಬ ಹೇಳಿಕೆಯುಂಟು. ಒಬ್ಬನೇ ಕರ್ತೃ ಬೇರೆ ಬೇರೆ ಅಂಕಿತಗಳನ್ನು ಬಳಸಿದ್ದಾರೆಂಬುದರಿಂದ ಹಾಗೂ ಬೇರೆ ಬೇರೆ ಕರ್ತೃಗಳು ಒಂದೇ ಅಂಕಿತವನ್ನು ಬಳಸಿದ್ದಾರೆಂಬುದರಿಂದ ಹಲವು ವರ್ಣಗಳ ಕರ್ತೃತ್ವದಲ್ಲಿ ಗೊಂದಲಗಳೇರ್ಪಟ್ಟಿವೆ. ತಿರುವೊಟ್ರಿಯಾರ್ ತ್ಯಾಗಯ್ಯರ್ ವಿರಚಿತವೆಂದು ನಂಬಲಾದ ದರ್ಬಾರ್ (ಚಲಮೇಲ), ಗೌಳ (ಚೆಲಿಮಿ), ಶಹನ (ಕರುಣಿಂಪ), ಕಾನಡ (ನಿನ್ನುಕೋರಿ) ರಾಗಗಳ ವರ್ಣಗಳಲ್ಲಿ ಅವರು 'ವೇಣುಗೋಪಾಲ' ಎಂಬ ಅಂಕಿತವನ್ನೂ, ಸಾರಂಗ (ಇಂತಮೋಡಿ) ಕೇದಾರಗೌಳ (ಸಾಮಿದಯಜೂಡ) ರಾಗಗಳ ವರ್ಣಗಳಲ್ಲಿ ಅವರು 'ತ್ಯಾಗೇಶ' ಎಂಬ ಅಂಕಿತವನ್ನೂ ಬಳಸಿದ್ದಾರೆನ್ನುವುದುಂಟು. ಆದರೆ ವೇಣುಗೋಪಾಲ ಎಂಬ ಅಂಕಿತದ ವರ್ಣಗಳು ತ್ಯಾಗಯ್ಯರ್ ಅವರ ತಂದೆ ವೀಣಾಕುಪ್ಪಯ್ಯರ್ ಅವರದು. ಕುಪ್ಪಯ್ಯರ್ ರಚಿಸಿದ ವರ್ಣಗಳನ್ನು ತ್ಯಾಗಯ್ಯರ್ ಮುದ್ರಣ ರೂಪದಲ್ಲಿ ತಂದರೆಂಬ ಹೇಳಿಕೆಯೂ ಇದೆ. ಕಲ್ಯಾಣಿ ರಾಗದ 'ವನಜಾಕ್ಷಿ' (ಅಟ್ಟತಾಳ) ಪಲ್ಲವಿ ಗೋಪಾಲಯ್ಯರ್ ರಚನೆಯೆಂದು ಕೆಲವರು ಅಭಿಪ್ರಾಯಪಟ್ಟರೆ ಇನ್ನು ಕೆಲವರು 'ಮೂಲವಟ್ಟಂ ರಂಗಸಾಮಿ' ಇದರ ಕರ್ತೃ ಎನ್ನುತ್ತಾರೆ. 'ಮಾ ಕಸ್ತೂರಿ ರಂಗಸಾಮಿ' ಎಂಬ ಸಾಹಿತ್ಯ ಭಾಗವೂ ಇಲ್ಲಿ ಕಾಣಬರುತ್ತದೆ. ಇನ್ನು, ಶಂಕರಾಭರಣ ರಾಗದ ಚಾಲಮೇಲ (ಅಟ್ಟತಾಳ) ವರ್ಣದಲ್ಲಿ 'ಸರಸಿಜನಾಭ' ಎಂಬ ಮುದ್ರೆಯಿದ್ದರೂ ಇದು ಸ್ವಾತಿ ತಿರುನಾಳರದಾಗಿಲ್ಲದೆ ತಂಜಾವೂರು ಚತುಷ್ಟಯರಲ್ಲಿ ಒಬ್ಬರಾದ ವಡಿವೇಲು ಇದರ ಕರ್ತೃ ಎಂಬ ಹೇಳಿಕೆಯೂ ಇದೆ. ಹಂಸಧ್ವನಿ ರಾಗದ (ಜಲಜಾಕ್ಷ) ವರ್ಣವು 'ವೆಂಕಟೇಶ' ಎಂಬ ಅಂಕಿತ ಹೊಂದಿದ್ದರೂ ಈ ರಚನೆಯ ಕರ್ತೃ ಮಾನಂಬುಚಾವಡಿ ವೆಂಕಟಸುಬ್ಬಯ್ಯರ್ ಅಥವಾ ಕುಪ್ಪುಸ್ವಾಮಿ ಇರಬಹುದೆಂಬ ಊಹೆಯೂ ಇದೆ. ಹೀಗೆ ಹಲವು ವರ್ಣಗಳಿಗೆ ಕರ್ತೃತ್ವ ನಿಖರತೆ ಕಾಣಬರದಿದ್ದರೂ ಅವು ಜನಪ್ರಿಯ ರಚನೆಗಳಾಗಿ ಹೆಚ್ಚು ಪ್ರಯೋಗದಲ್ಲಿರುವುದಂತೂ ದಿಟ.

ಅಪರೂಪವಾಗಿ ಇನ್ನು ಕೆಲವು ವರ್ಣಗಳಿಗೆ ಏಕಕರ್ತೃತ್ವವಿಲ್ಲದೆ ಒಬ್ಬರಿಗಿಂತ ಹೆಚ್ಚುಮಂದಿ ಸೇರಿ ಇಂತಹ ವರ್ಣಗಳನ್ನು ರಚಿಸಿರುವುದೂ ಉಂಟು. ಉದಾಹರಣೆಗೆ, ಶ್ರೀರಂಜನಿರಾಗದ ಆದಿತಾಳದ ವರ್ಣ 'ಸಾಮಿನಿನ್ನೆಕೋರಿ ಚಾಲ ಮರುಲುಕೊನ್ನದಿರ'. ಇದರ ಪಲ್ಲವಿ, ಅನುಪಲ್ಲವಿ, ಚಿಟ್ಟೆಸ್ವರ, ಎತ್ತುಗಡೆ ಪಲ್ಲವಿ ಮತ್ತು ಮೊದಲ ಎತ್ತುಗಡೆ ಸ್ವರವನ್ನು ಶ್ಯಾಮಶಾಸ್ತ್ರಿಗಳೂ, ಮೂರನೆಯದನ್ನು ಚಿನ್ನಸ್ವಾಮಿ ದೀಕ್ಷಿತರೂ, ಕಡೆಯದನ್ನು ಮುತ್ತುಸ್ವಾಮಿ ದೀಕ್ಷಿತರೂ ರಚಿಸಿದಂತೆ ಉಲ್ಲೇಖವಿದೆ. ಅಂತೆಯೇ 'ಸರಸಕು ರಾಕು ಸರಸ' ಎಂಬ ಭೈರವಿ (ಆದಿತಾಳ) ವರ್ಣವನ್ನು ವೀಣಾಕುಪ್ಪಯ್ಯನವರೂ, ವಾಲಾಜಪೇಟೆ ವೆಂಕಟರಮಣ ಭಾಗವತರೂ ಸಹಯೋಗಿತ್ವದಲ್ಲಿ ರಚಿಸಿದಂತೆ ಹೇಳುತ್ತಾರೆ. ಈ ವರ್ಣವು ವಿಲೋಮ ಸ್ವರಸಾಹಿತ್ಯವನ್ನು ಹೊಂದಿರುವುದು ಗಮನಾರ್ಹ ಅಂಶ.

**ವರ್ಣದ ಪ್ರಯೋಜನಗಳು :** ವರ್ಣಗಳ ಪಲ್ಲವಿ, ಅನುಪಲ್ಲವಿ, ಚರಣ ಭಾಗದಲ್ಲಿ ಸಾಹಿತ್ಯಾಕ್ಷರಗಳು ಕಡಿಮೆಯಿದ್ದು ಅಕಾರ, ಇಕಾರ, ಉಕಾರಗಳನ್ನು ಅಗತ್ಯವಾಗಿ ಬಳಸುವುದರಿಂದ ಗಾಯಕರಿಗೆ ಶ್ವಾಸದಲ್ಲಿನ ದೀರ್ಘತೆಯಾಗಿ ಶಾರೀರಸಂಸ್ಕರಣೆ, ವಿಳಂಬಲಯದ ಮೇಲಿನ ಹತೋಟಿ ಸಾಧ್ಯವಾಗುತ್ತದೆ. ಅಂತೆಯೇ ವಾದ್ಯ ನುಡಿಸುವವರಿಗೆ ವಾದನ ತಂತ್ರದ ಮೇಲೆ ಹಿಡಿತ ಲಭ್ಯವಾಗುತ್ತದೆ. ಸಂಗೀತಾಭ್ಯಾಸಿಗಳು ಹಲವು ರಾಗಗಳಲ್ಲಿರುವ ಅಧಿಕ ಸಂಖ್ಯೆಯ ವರ್ಣಗಳನ್ನು ಅಭ್ಯಸಿಸುವುದರಿಂದ ರಾಗಗಳ ಪೂರ್ಣಸ್ವರೂಪ ಅರಿವಾಗುತ್ತದೆ. ಆರಂಭದಲ್ಲಿ ಎರಡು ಕಾಲಗಳಲ್ಲಷ್ಟೇ ಪ್ರಯೋಗ ಮಾಡುವ ವರ್ಣಗಳು ಪ್ರೌಢಮಟ್ಟದಲ್ಲಿ ತ್ರಿಕಾಲದಲ್ಲೂ, ಗತಿಭೇದದಲ್ಲೂ ಹಾಡುವುದು ಸಾಧ್ಯವಾಗಿ ಲಯದ ಮೇಲಿನ ಪೂರ್ಣ ಹತೋಟಿ ಬಂದು ಮನೋಧರ್ಮ ಸಂಗೀತದ ಭಾಗಗಳಾದ ತಾನ, ನೆರವಲ್, ಸ್ವರಕಲ್ಪನೆ, ಪಲ್ಲವಿಯ ತ್ರಿಕಾಲ, ತ್ರಿಶ್ರ ಪ್ರಯೋಗಕ್ಕೆ ಅನುವಾಗುತ್ತದೆ. ಸಂಗೀತ ಹಾಗೂ ನೃತ್ಯ ಕಛೇರಿಗಳು, ಆರಂಭದಲ್ಲಿ ಪ್ರಯೋಗಿಸುವ ವರ್ಣಗಳಿಂದಾಗಿ ವಿಶೇಷವಾಗಿ ಕಳೆಗಟ್ಟುವುದರಲ್ಲಿ ಸಂಶಯವಿಲ್ಲ.

**ಕೆಲವು ವಿಶೇಷ ಅಂಶಗಳು:**

1. ಆದಿಪ್ಪಯ್ಯನವರು ಹಲವು ವರ್ಣಗಳನ್ನು ರಚಿಸಿದ್ದಾರಾದರೂ ದುರದೃಷ್ಟವಶಾತ್ ಅವೆಲ್ಲವೂ ಉಪಲಬ್ಧವಿಲ್ಲ.

2. ನಾಗಸ್ವರ ವಿದ್ವಾಂಸರಾದ ಕೋರನಾಡು ನಟೇಶಪಿಳ್ಳೆಯವರು 126 ವರ್ಣಗಳನ್ನು ರಚಿಸಿದ್ದರಂತೆ. ಈ ರಚನೆಗಳ ಮೌಲ್ಯವರಿಯದ ಅವರ ವಂಶಸ್ಥರೇ ಅದರ ಹಸ್ತಪ್ರತಿಗಳನ್ನು ಹಾಳು ಮಾಡಿದಂತೆ ಹೇಳುತ್ತಾರೆ.

3. ಶ್ಯಾಮಶಾಸ್ತ್ರಿಗಳು ದೇವೀ ಆರಾಧಕರು. ಅವರು ತಮ್ಮೆಲ್ಲ ರಚನೆಗಳನ್ನೂ ದೇವೀಸ್ತುತಿಯಾಗಿಯೇ ರಚಿಸಿದ್ದರೂ 'ಸಾಮಿನಿರಮ್ಮನವೇ' ವರ್ಣದಲ್ಲಿ ಕಂಚಿಕ್ಷೇತ್ರದ ವರದರಾಜನನ್ನು ಸ್ತುತಿಸಿದ್ದಾರೆ. ಈ ವರ್ಣದಲ್ಲಿ ವಾಗ್ಗೇಯಕಾರ ಮುದ್ರೆ ಇಲ್ಲದಿರುವುದು ಮತ್ತು ಚರಣಭಾಗದಲ್ಲಿನ 2-3ನೇ ಸ್ವರಗಳಿಗೆ ಸಾಹಿತ್ಯ ಕಾಣಬರದಿರುವುದರೂ ಗಮನಾರ್ಹ. ಶ್ಯಾಮಶಾಸ್ತ್ರಿಗಳ ನಾಲ್ಕು ವರ್ಣಗಳು ಲಭ್ಯವಿದ್ದು ಅವೆಲ್ಲವೂ ಬೇರೆ ಬೇರೆ ತಾಳಗಳಲ್ಲಿ ರಚಿತವಾಗಿರುವುದು ಮುಖ್ಯ ಅಂಶ.

4. ತ್ಯಾಗರಾಜರ ಉಪಲಬ್ಧ ಕೃತಿಭಂಡಾರದಲ್ಲಿ ವರ್ಣ ಎಂಬ ರಚನೆ ಲಭ್ಯವಿಲ್ಲವಾದರೂ ಇವರ ಪಂಚರತ್ನಕೃತಿಗಳು ವರ್ಣದ ಸ್ವರೂಪವನ್ನು ಹೋಲುವುದುಂಟು. ವರ್ಣಗಳನ್ನು ರಚಿಸಬೇಕೆಂಬ ತಮ್ಮ ಶಿಷ್ಯರ ಕೋರಿಕೆಯಿಂದಲೇ ತ್ಯಾಗರಾಜರು ವರ್ಣಗಳನ್ನು ಹೋಲುವಂತೆ ಪಂಚರತ್ನ ಕೃತಿಗಳನ್ನು ರಚಿಸಿದರೆಂಬ ಅಭಿಪ್ರಾಯವೂ ಒಂದಿದೆ. ಸಂಗೀತ ತ್ರಿಮೂರ್ತಿಗಳಲ್ಲಿ ತ್ಯಾಗರಾಜರನ್ನುಳಿದು ಮಿಕ್ಕ ವಾಗ್ಗೇಯಕಾರ ದ್ವಯರು ವರ್ಣಕರ್ತರಾಗಿದ್ದಾರೆ.

5. ಸುಬ್ಬರಾಮ ದೀಕ್ಷಿತರು ದರ್ಬಾರ್ ರಾಗದಲ್ಲಿ ಕಾರ್ತಿಕೇಯನ ಸ್ತುತಿಯಾಗಿ ವರ್ಣವೊಂದನ್ನು ರಚಿಸಿ ಎಟ್ಟಪ್ಪ ದೊರೆಯೆದುರು ಹಾಡಿದರಂತೆ. ರಚನೆಯ ಪ್ರೌಢಿಮೆಯನ್ನು ದೊರೆ ಮೆಚ್ಚಿಬಿಡುವನೆಂಬ ಅಸೂಯೆಯಿಂದ ಕೆಲವು ವಿದ್ವಾಂಸರು ರಾಜನೊಂದಿಗೆ ಹೀಗೆಂದರಂತೆ : ಪ್ರಸ್ತುತ ವರ್ಣದ ಕರ್ತೃ ಸುಬ್ಬರಾಮದೀಕ್ಷಿತರಲ್ಲ. ಅದರ ಸೃಷ್ಟಿಕರ್ತ ಸುಬ್ಬರಾಮದೀಕ್ಷಿತರ ತಂದೆ. ತಂದೆ ರಚಿಸಿದ ವರ್ಣವನ್ನು ತಮ್ಮದೇ ವರ್ಣವೆಂದು ಸುಬ್ಬರಾಮದೀಕ್ಷಿತರು ಸುಳ್ಳಾಡುತ್ತಿದ್ದಾರೆ ಎಂದರಂತೆ. ರಾಜ ಇದರ

ಸತ್ಯಾಸತ್ಯತೆಯನ್ನು ನಿರ್ಣಯಿಸುವುದಕ್ಕಾಗಿ ಸುಬ್ಬರಾಮ ದೀಕ್ಷಿತರಿಗೆ ನಿರ್ದಿಷ್ಟ ಎಡುಪಿನಲ್ಲಿ ಜತಿಸ್ವರವೊಂದನ್ನು ರಚಿಸಿಡುವಂತೆ ಆಜ್ಞಾಪಿಸಿ ಹೊರಹೊರಟನಂತೆ. ರಾಜ ಹಿಂತಿರುಗುವ ಮೊದಲೇ ಸುಬ್ಬರಾಮದೀಕ್ಷಿತರು ಜತಿಸ್ವರವನ್ನು ಪೂರ್ಣಗೊಳಿಸಿದ್ದರಂತೆ. ಅನಂತರ ದೊರೆಯೆದುರು ಅದನ್ನು ಹಾಡಿದಾಗ, ರಾಜ ಇತರ ವಿದ್ವಾಂಸರು ಹೇಳಿದ ಮಾತು ಸುಳ್ಳೆಂದು ಅರಿತು ಸುಬ್ಬರಾಮದೀಕ್ಷಿತರನ್ನು ಬಹುಮಾನಿಸಿದನಂತೆ. ವಾಸ್ತವವಾಗಿ ಸುಬ್ಬರಾಮ ದೀಕ್ಷಿತರೂ, ರಾಮಸ್ವಾಮಿ ದೀಕ್ಷಿತರೂ ಅನುಬಂಧದೊಂದಿಗೆ ಹಲವು ವರ್ಣಗಳನ್ನು ರಚಿಸಿದ್ದಾರೆ.

6. ತಂಜಾವೂರು ಸಹೋದರರು ವರ್ಣರಚನಕಾರರೂ ಹೌದು. ಇವರು ಒಂದೇ ವರ್ಣಮಟ್ಟಿಗೆ ಬೇರೆ ಬೇರೆ ಸಾಹಿತ್ಯವನ್ನು ಅಳವಡಿಸುತ್ತಿದ್ದ ಸಂಗತಿಯ ಉಲ್ಲೇಖವುಂಟು.ಬೋಧಕರೂ, ವೇದಿಕೆ ಕಲಾವಿದರೂ ಆಗಿದ್ದ ಇವರು ಒಂದೇ ಧಾತುವಿಗೆ ಸೃಷ್ಟಿಸುತ್ತಿದ್ದ ಸಾಹಿತ್ಯಗಳಲ್ಲಿ, ಒಂದು ಭಗವಂತನ ಸ್ತುತಿಯಾದರೆ ಇನ್ನೊಂದು ರಾಜಸ್ತುತಿಯೋ ಮಂತ್ರಿವರ್ಣನೆಯೋ ಆಗಿರುತ್ತಿದ್ದಿತಂತೆ. ಅಗತ್ಯ ಮತ್ತ ಸಂದರ್ಭಕ್ಕೆ ತಕ್ಕಂತೆ ಈ ಸಾಹಿತ್ಯಗಳನ್ನು ಇವರು ಬಳಸುತ್ತಿದ್ದರಂತೆ.

7. ವರ್ಣ ರಚನಕಾರರಲ್ಲಿ ಮೊದಲಿಗರೆನ್ನಲಾದ ಮೇಲಟ್ಟೂರು ವೀರಭದ್ರಯ್ಯನವರ ವರ್ಣಗಳನ್ನು ಆದಿ ಅಪ್ಪಯ್ಯನವರು ಮಾದರಿಯಾಗಿಟ್ಟುಕೊಂಡರೆನ್ನುವುದುಂಟು. ಇವರು ಚೌಕಂವೀರಭದ್ರಯ್ಯ, ಮಾರ್ಗದರ್ಶಿ ವೀರಭದ್ರಯ್ಯನೆಂದೂ ಕರೆಯಲ್ಪಟ್ಟಿದ್ದಾರೆ. ತಂಜಾವೂರನ್ನಾಳಿದ ಪ್ರತಾಪಸಿಂಹನ ಆಸ್ಥಾನದಲ್ಲಿದ್ದ ಇವರು ಅಚ್ಚುತ್ಯವರದ, ಉನ್ನತಪುರೀಶ, ಶಿವಪ್ರಿಯಾ, ಅಚ್ಚ್ಯುತಪುರಿ ವರದುನಿ ದಾಸುಡನಿ, ಸಖುಡನಿ ಮುಂತಾದ ಹಲವು ಅಂತಗಳೊಂದಿಗೆ ರಚನೆಗಳನ್ನು ಸೃಷ್ಟಿಸಿದ್ದಾರೆ. 'ದಯಜೂಡವಲೆಯನಿ ವ್ಯಾಳ ತಾಮಸಮೇಲ (ಹುಸೇನಿ-ಆದಿ) ಎಂತವಂಚನ ಜೇಸೇನೇ (ಆನಂದ ಭೈರವಿ-ಆದಿ) ಅಲುಗನೇಲ (ಕನ್ನಡ-ಅಟ್ಟ) ವಲಪುನನು (ತೋಡಿ-ಅಟ್ಟ)' ಮುಂತಾದ ವರ್ಣಗಳನ್ನು ರಚಿಸಿದ್ದಾರೆ.

8. ಶ್ರೇಷ್ಠ ನಾಟ್ಯರೂಪಕಗಳ ಕರ್ತರಾದ ಮೇಲಟ್ಟೂರು ವೆಂಕಟರಾಮಾಶಾಸ್ತ್ರಿಗಳು ವರ್ಣಗಳನ್ನು ತಮ್ಮ ನೃತ್ಯ ನಾಟಕಗಳಲ್ಲಿ ಬಳಸಿರುವಂತೆ ತಿಳಿದುಬರುತ್ತದೆ. ಮೇಲಟ್ಟೂರು ವೀರಭದ್ರಯ್ಯನವರ ಸ್ವರಜತಿಯ ಮಾದರಿಯಲ್ಲೇ ವೆಂಕಟರಾಮಾ ಶಾಸ್ತ್ರಿಗಳು ಆನಂದಭೈರವಿ ರಾಗದಲ್ಲಿ ವರ್ಣವೊಂದನ್ನು ರಚಿಸಿದ್ದಾರೆ.

9. ಸೊಂಟಿ ವೆಂಕಟಸುಬ್ಬಯ್ಯ ಆದಿಪ್ಪಯ್ಯನವರ ಕಿರಿಯ ಸಮಕಾಲೀನರು. ಇವರು ಬಿಲಹರಿ ರಾಗದಲ್ಲಿ ತುಳಜ ಮಹಾರಾಜನನ್ನು ಪ್ರಶಂಸಿಸಿ ವರ್ಣ ರಚಿಸಿರುವುದುಂಟು. ಇವರ ಇನ್ನೊಂದು ವರ್ಣ ನಿನ್ನುಕೋರಿ ಪೂರ್ವಿಕಲ್ಯಾಣಿ ರಾಗದಲ್ಲಿದೆ. ಈ ವೆಂಕಟಸುಬ್ಬಯ್ಯನವರ ಪುತ್ರರಾದ ಸೊಂಟಿ ವೆಂಕಟರಮಣಯ್ಯನವರು ಶ್ರೀ ತ್ಯಾಗರಾಜರ ಗುರುಗಳು.

ಒಟ್ಟಿನಲ್ಲಿ ನೂರಾರು, ಸಾವಿರಾರು ವರ್ಣಗಳು ಕರ್ನಾಟಕ ಸಂಗೀತೇತಿಹಾಸದ ಆಧುನಿಕ ಕಾಲದಲ್ಲಿ ರಚಿತವಾಗಿ, ಅವುಗಳಲ್ಲೆಷ್ಟೋ ನಮ್ಮ ಕೈ ಸೇರದಿದ್ದರೂ ಇಂದಿಗೂ ಅಧಿಕ ಸಂಖ್ಯೆಯ ವರ್ಣಗಳು ಉಪಲಬ್ಧವಿರುವುದು ನಮ್ಮ ಸುದೈವ.

**ಸೂಚನೆ :** ಕೆಲವು ವರ್ಣಗಳ ಕರ್ತೃತ್ವದಲ್ಲಿ ಅಭಿಪ್ರಾಯ ಭೇದವಿದೆಯಾದರೂ ಈ ಹೊತ್ತಿಗೆಯಲ್ಲಿ ರಚನಕಾರರ ಹೆಸರನ್ನು ನಮೂದಿಸಲಾಗಿದೆ. ಇದಕ್ಕೆ ಅಚ್ಚಿನಲ್ಲಿ ದೊರೆತ ಮಾಹಿತಿಯನ್ನು ಆಧರಿಸಿದೆ.

# ವಿಷಯಾನುಕ್ರಮಣಿಕೆ



**ಡಾ|| ಟಿ.ಎನ್ ಪದ್ಮ**

ಡಾ|| ತುಮಕೂರು ನರಸಿಂಹಶಾಸ್ತ್ರಿ ಪದ್ಮ ಮೈಸೂರಿನಲ್ಲಿ ೧೯೪೪ರಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಲಲಿತಕಲೆಗಳ ಕಾಲೇಜಿನಲ್ಲಿ ಹಾಗೂ ಖ್ಯಾತ ಸಂಗೀತ ವಿದ್ವನ್ಮಣಿ ಪ್ರಾಂಶುಪಾಲ ಪ್ರೊ. ವಿ. ರಾಮರತ್ನಂರವರಲ್ಲಿ ಸಂಗೀತಾಭ್ಯಾಸ ನಡೆಸಿ, ೧೯೭೦ರಲ್ಲಿ ಪ್ರಥಮ ಶ್ರೇಣಿ ಪ್ರಥಮ ಸ್ಥಾನದೊಂದಿಗೆ ಬಿ. ಮ್ಯೂಸಿಕ್ ಪದವಿ ಪಡೆದರು. ೧೯೭೨ರಲ್ಲಿ ಮತ್ತೆ ಪ್ರಥಮ ಶ್ರೇಣಿ ಪ್ರಥಮಸ್ಥಾನದೊಂದಿಗೆ ಎಂ. ಮ್ಯೂಸಿಕ್ ಸ್ನಾತಕೋತ್ತರ ಪದವಿಗಳಿಸಿದರು. ಪದವಿಗಳಲ್ಲಿ ರ್‍ಯಾಂಕ್ ಪಡೆದದ್ದಕ್ಕಾಗಿ ರಾಜ್ಯ ಸರ್ಕಾರದ ಅಭಿನಂದನ ಪ್ರಶಸ್ತಿಯನ್ನೂ ವಿಶ್ವವಿದ್ಯಾನಿಲಯದ ಚಿನ್ನದ ಪದಕಗಳನ್ನೂ ಪಡೆದರು. ಬಿ.ಎಡ್. ಪದವೀಧರರೂ ಆಗಿರುವ ಶ್ರೀಮತಿಯವರು ೧೯೯೬ರಲ್ಲಿ ಪ್ರೊ.ಬಿ.ಎಸ್. ವಿಜಯರಾಘವನ್ ಅವರ ಮಾರ್ಗದರ್ಶನದಲ್ಲಿ ಸಲ್ಲಿಸಿದ "ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ - ಒಂದು ಅಧ್ಯಯನ" ಮಹಾ ಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ ಪದವಿಯೂ ಲಭಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಲಲಿತಕಲೆಗಳ ಕಾಲೇಜಿನಲ್ಲಿ ೧೯೭೪ರಿಂದ ಅಧ್ಯಾಪನ ಆರಂಭಿಸಿ ಗಾಯನ ವಿಭಾಗದ ಪ್ರಾಧ್ಯಾಪಕಿಯೂ ಮುಖ್ಯಸ್ಥೆಯೂ ಆಗಿ ಸೇವೆ ಸಲ್ಲಿಸಿ ೨೦೦೫ರಲ್ಲಿ ಸ್ವಯಂ ನಿವೃತ್ತಿ ಪಡೆದಿದ್ದಾರೆ.

ಮೈಸೂರು ಆಕಾಶವಾಣಿ, ಸಂಗೀತನೃತ್ಯ ಅಕಾಡೆಮಿ, ಕರ್ನಾಟಕ ಗಾನಕಲಾ ಪರಿಷತ್ತು, ಜೆ.ಎಸ್.ಎಸ್. ಸಂಗೀತ ಸಭಾ ಮಂತಾದ ಪ್ರತಿಷ್ಠಿತ ಸಂಘ ಸಂಸ್ಥೆಗಳ ಆಶ್ರಯದಲ್ಲಿ ಗಾಯನ, ಪ್ರಾತ್ಯಕ್ಷಿತೆ, ಉಪನ್ಯಾಸ, ಗ್ರಂಥ ಪರಿಚಯಾದಿ ಕಾರ್ಯಕ್ರಮಗಳನ್ನು ನೀಡಿದ್ದಾರಲ್ಲದೆ ಸಂಗೀತದ ಬಹುಮುಖ ವಿಷಯಗಳಿಗೆ ಸಂಬಂಧಿಸಿದಂತೆ ವಿದ್ವಲ್ಲೇಖನಗಳನ್ನು ಮಂಡಿಸುತ್ತ ಬಂದಿದ್ದಾರೆ. ಶ್ರೀಮತಿಯವರು ಸಲ್ಲಿಸಿರುವ ಅಮೂಲ್ಯ ಸೇವೆಯನ್ನು ಗುರುತಿಸಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ೨೦೦೩ರಲ್ಲಿ 'ಕರ್ನಾಟಕ ಕಲಾಶ್ರೀ', ಶ್ರೀಕಾಂತಂ ಸಂಗೀತ ಸಭಾ ಮತ್ತು ಸಪ್ತಗಿರಿ ಭಜನಮಂಡಳಿ ೨೦೦೭ರಲ್ಲಿ 'ಪ್ರಣವಶ್ರೀ', ಅನನ್ಯ ಬಿ.ಎಂ. ಎಲ್ ಕಲ್ಚರಲ್ ಅಕಾಡೆಮಿ ೨೦೦೭ರಲ್ಲಿ 'ಶಾಸ್ತ್ರ ಕೌಸ್ತುಭ' ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ.

ಸಂಗೀತದ ಪ್ರಾಯೋಗಿಕ ವಿಭಾಗದ ಕಲಾಭ್ಯಾಸಿಗಳಿಗೆ ಅನುಕೂಲವಾಗುವಂತೆ ಶ್ರೀಮತಿಯವರು ವರ್ಣಗಳು, ತಿಲ್ಲಾನಗಳು, ಕೀರ್ತನ ಕುಸುಮಾಂಜಲಿ (ಶಿವಸ್ತುತಿಗಳ ಸಂಗ್ರಹ) ಜಾವಳಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಕರ್ನಾಟಕ ಸಂಗೀತಾಂತರಂಗದ ಜೀವಬಿಂದುವೇ ಆಗಿರುವ ವರ್ಣಗಳನ್ನು ಕುರಿತಂತೆ ಸಂಪಾದಿಸಿರುವ **(೫೪ ವರ್ಣಗಳು - ಸಂಪುಟ ಒಂದು)** ಹೊತ್ತಿಗೆಯು ಸಂಗೀತಾಭ್ಯಾಸಿಗಳ, ಕಲಾವಿದರ ಪರಮಾದರಕ್ಕೆ ಪಾತ್ರವಾಗಿ ಅತ್ಯಂತ ಉಪಯುಕ್ತವೆನಿಸಿದೆ. ಇದರ ಎರಡನೇ ಆವೃತ್ತಿಯೂ ಇದೀಗ ಪ್ರಕಟವಾಗಿದೆ. ಅಲ್ಲದೆ **ವರ್ಣಗಳು - ಸಂಪುಟ ಎರಡು** ಎಂಬ ಶೀರ್ಷಿಕೆಯ ವರ್ಣಗಳ ಪ್ರಸ್ತುತ ಸಂಕಲನದಲ್ಲಿ ಶ್ರೀಮತಿಯವರು ಪ್ರಾತಿನಿಧಿಕವಾಗಿ ೬೫ ವರ್ಣಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಇದು ಅಭ್ಯಾಸಿಗಳಿಗೆ ಅತ್ಯುಪಯುಕ್ತವಾಗಲಿದೆ.